ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಸಚಿವಾಲಯದ ನೌಕರರನ್ನು ಇತರೆ ಇಲಾಖೆಗಳಿಗೆ ಕಳುಹಿಸದಿರುವಂತೆ ನಿಯಮ ಮಾಡುವ ಬಗ್ಗೆ

ಶ್ರೀ ಎಂ. ಪಿ. ಸುನೀಲ್ ಸುಬ್ರಮಣಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

555 (642) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಸಚಿವಾಲಯವು ರಾಜ್ಯದ ರಾಜಧಾನಿಯಲ್ಲಿದ್ದು ಸರ್ಕಾರದ ಮೂಲ ಆದೇಶ ಮತ್ತು ನಿಯಮಗಳನ್ನು ಮಾಡುವ ಮೂಲ ಕೇಂದ್ರವಾಗಿದ್ದು ಇಲ್ಲಿನ ಅಧಿಕಾರಿ/ಸಿಬ್ಬಂದಿಗಳನ್ನು ಬೇರೆ ನಿಗಮ/ಇಲಾಖೆಗಳಿಗೆ ನಿಯೋಜನೆ ಮೇರೆಗೆ ಕಳುಹಿಸಿದ್ದಲ್ಲಿ ಸಚಿವಾಲಯದ ಕೆಲಸ ಕಾರ್ಯಗಳಿಗೆ ತೊಂದರೆಯಾಗುವುದಿಲ್ಲವೆ; (ವಿವರ ನೀಡುವುದು)

(ಆ) ಸಚಿವಾಲಯದ ಅಧಿಕಾರಿಗಳನ್ನು ಬೇರೆ ಬೇರೆ ಇಲಾಖೆಯ ಮುಖ್ಯಸ್ಥರುಗಳನ್ನಾಗಿ ನೇಮಕ ಮಾಡುತ್ತಿದ್ದು ಇದರಿಂದಾಗಿ ಆಯಾ ಮಾತೃ ಇಲಾಖೆಯ ಸಿಬ್ಬಂದಿ ಮತ್ತು ಅಧಿಕಾರಿಗಳು ಬಡ್ತಿಯಿಂದ ವಂಚಿತರಾಗುವುದಿಲ್ಲವೆ;

(ಇ) ಸಚಿವಾಲಯದ ಸಿಬ್ಬಂದಿ/ಅಧಿಕಾರಿಗಳನ್ನು ನಿಯೋಜನೆ ಮೇರೆಗೆ ಬೇರೆ ಬೇರೆ ಇಲಾಖೆಗಳಿಗೆ ಕಳುಹಿಸದಿರಲು ಸರ್ಕಾರದ ಕಠಿಣ ಕ್ರಮಗಳೇನು; (ಮಾಹಿತಿ ನೀಡುವುದು)

(ಈ) ಈ ಹಿಂದೆ ಬೇರೆ ಇಲಾಖೆಗಳಿಗೆ ನಿಯೋಜನೆ ಮೇಲೆ ತೆರಳಿದ ಅಧಿಕಾರಿಗಳು ಮತ್ತು ಸಚಿವಾಲಯದ ಸೇವೆಗೆ ಹಿಂದಿರುಗಿದಾಗ ಇಲ್ಲಿನ ಜೇಷ್ಠತೆಯಲ್ಲಿ ಕನಿಷ್ಟ ಸ್ಥಾನಕ್ಕೆ ನೀಡಲು ನಿಯಮಗಳನ್ನು ಮಾಡಲು ಸರ್ಕಾರದ ನಿಲುವೇನು? (ವಿವರ ನೀಡುವುದು)